# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 472
ಸದಸ್ಯರ ಹೆಸರು : ಡಾ. ಜೈಮಾಲಾರಾಮಚಂದ್ರ,
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಒಟ್ಟು ಎಷ್ಟು ಬಸ್ ಡಿಪೋಗಳಿವೆ (ಜಿಲ್ಲಾವಾರು ವಿವರ ನೀಡುವುದು); | ರಾಜ್ಯದಲ್ಲಿ ಒಟ್ಟು 232 ಘಟಕಗಳಿದ್ದು, ಜಿಲ್ಲಾವಾರು ಘಟಕಗಳ ಮಾಹಿತಿಯನ್ನು **ಅನುಬಂಧ** ದಲ್ಲಿ ಒದಗಿಸಲಾಗಿದೆ. |
| ಆ) | ಎಷ್ಟು ಖಾಸಗಿ ಬಸ್ಸುಗಳು ಸಾರಿಗೆ ಅನುಮತಿ ಪಡೆದು ಓಡಾಡುತ್ತಿವೆ; ಅನಧಿಕೃತ ಬಸ್ಸುಗಳು ಪರ್ಮಿಟ್ ಇಲ್ಲದೇ ಚಾಲನೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇವುಗಳ ನಿಗ್ರಹಕ್ಕೆ ಯಾವ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | <u>ರಾಜ್ಯದಲ್ಲಿ ದಿನಾಂಕ:31.01.2020ರ ಅಂತ್ಯಕ್ಕೆ ನೋಂದಣಿಯಾಗಿ ಪರವಾನಗಿ ಇರುವ ಖಾಸಗಿ ಬಸ್‌ಗಳ ವಿವರ ಕೆಳಕಂಡಂತಿದೆ:</u><br><br>ಮಜಲು ವಾಹನಗಳು: 7632<br>ಒಪ್ಪಂದ ವಾಹನಗಳು: 4002<br>ಅಖಿಲ ಭಾರತ ಪ್ರವಾಸಿ ವಾಹನಗಳು: 1357<br>ಒಟ್ಟು: 12991<br><br>ಖಾಸಗಿ ಬಸ್‌ಗಳು ಪರವಾನಗಿ ಇಲ್ಲದೆ ಸಂಚರಿಸುವ ಬಗ್ಗೆ ತೀವ್ರವಾಗಿ ಗಮನಹರಿಸಲಾಗುತ್ತಿದೆ. ಮೋಟಾರು ವಾಹನ ಕಾಯ್ದೆ 1988 ಮತ್ತು ಅದರಡಿ ರಚಿತವಾದ ನಿಯಮಗಳಡಿ ರಹದಾರಿ ನಿಯಮ ಪಾಲನೆ ಮಾಡುವುದಕ್ಕೆ ಖಾಸಗಿ ಬಸ್ ಮಾಲೀಕರಿಗೆ ರಹದಾರಿಗಳಲ್ಲಿ ನಿಬಂಧನೆ ವಿಧಿಸಲಾಗಿರುತ್ತದೆ. ಸಾರಿಗೆ ಇಲಾಖೆ ವತಿಯಿಂದ ನಿರಂತರವಾಗಿ ಖಾಸಗಿ ಬಸ್‌ಗಳ ತಪಾಸಣೆಯನ್ನು ರಾಜ್ಯಾದ್ಯಂತ ಕೈಗೊಂಡು, ಅನಧಿಕೃತವಾಗಿ ಸಂಚರಿಸುವ ಮತ್ತು ರಹದಾರಿ ನಿಬಂಧನೆ ಉಲ್ಲಂಘಿಸಿದ ಖಾಸಗಿ ಬಸ್‌ಗಳನ್ನು ತೀವ್ರವಾಗಿ ತಪಾಸಣೆ ಮಾಡಲಾಗುತ್ತಿದೆ. ನಿಯಮ ಉಲ್ಲಂಘಿಸಿದ ಪ್ರಕರಣಗಳಲ್ಲಿ ಮೋಟಾರು ವಾಹನ ಕಾಯ್ದೆ 1988 ಮತ್ತು ಅದರಡಿ ರಚಿತವಾದ ನಿಯಮಗಳಡಿ ಸೂಕ್ತ ಕಾನೂನು ಕ್ರಮ ಜರುಗಿಸಿ ತೆರಿಗೆ ಮತ್ತು ದಂಡ ವಸೂಲಾಗುತ್ತಿದೆ ಮತ್ತು ಪ್ರವರ್ತನ ಕಾರ್ಯ ನಿರಂತರವಾಗಿ ಜಾರಿಯಲ್ಲಿದೆ. |

| | | |
|---|---|---|
| | | ದಿನಾಂಕ: 01.04.2019 ರಿಂದ 31.01.2020 ರವರೆಗೆ ಕೈಗೊಂಡ ಖಾಸಗಿ ಬಸ್‌ಗಳ ತನಿಖಾ ಕಾರ್ಯದ ವಿವರಗಳು ಕೆಳಕಂಡಂತಿವೆ: |

| ವಾಹನ ಮಾರ್ಗ | ತಪಾಸಿಸಿದ ವಾಹನಗಳು | ದಾಖಲಿಸಿದ ವಾಹನಗಳು | ವಶಪಡಿಸಿದ ವಾಹನಗಳು | ವಸೂಲಿಸಿದ ಮೊತ್ತ(ರೂ.ಗಳಲ್ಲಿ) | | |
|---|---|---|---|---|---|---|
| | | | | ತೆರಿಗೆ | ದಂಡ | ಒಟ್ಟು |
| ಮಜಲು ವಾಹನ | 20763 | 2296 | 156 | 11108107 | 14891284 | 25999391 |
| ಒಪ್ಪಂದ ವಾಹನ | 38850 | 4145 | 88 | 159483017 | 16468069 | 175951086 |
| ಅಖಿಲ ಭಾರತ ಪ್ರವಾಸಿ ವಾಹನ | 55674 | 11885 | 76 | 320751484 | 20410686 | 341162170 |
| ಒಟ್ಟು | 115287 | 18326 | 320 | 491342608 | 51770039 | 543112647 |

| | | |
|---|---|---|
| ಇ) | ಪ್ರಸ್ತುತ ವರ್ಷದಲ್ಲಿ ಹೊಸ ಬಸ್ಸುಗಳನ್ನು ಖರೀದಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಪ್ರಸ್ತುತ ವರ್ಷದಲ್ಲಿ ಸಾರಿಗೆ ಸಂಸ್ಥೆಗಳಲ್ಲಿ ಹೊಸ ವಿವಿಧ ಮಾದರಿಯ ಬಸ್ಸುಗಳನ್ನು ಹಾಗೂ ಎಲೆಕ್ಟ್ರಿಕ್ ಬಸ್ಸುಗಳನ್ನು ಖರೀದಿಸಲು ಯೋಜಿಸಲಾಗಿರುತ್ತದೆ. |
| ಈ) | ಬೆಂಗಳೂರಿನಲ್ಲಿ ಮೆಟ್ರೋ ರೈಲು ಯೋಜನೆಯು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಸರ್ಕಾರವು ಎಷ್ಟು ಬಸ್ಸುಗಳನ್ನು ಕಡಿತಗೊಳಿಸಿದೆ? | ಬೆಂ.ಮ.ಸಾ.ಸಂಸ್ಥೆಯಿಂದ ಬಸ್ಸುಗಳನ್ನು ಕಡಿತಗೊಳಿಸಿರುವುದಿಲ್ಲ. ಆದರೆ, ಮೆಟ್ರೋ ರೈಲು ಮಾರ್ಗಗಳಿಗೆ ಸಮಾನಾಂತರವಾಗಿ ಕಾರ್ಯಾಚರಣೆಯಾಗುತ್ತಿದ್ದ ಮಾರ್ಗಗಳನ್ನು ಪ್ರಯಾಣಿಕರ ಬೇಡಿಕೆ/ ದಟ್ಟಣೆಗನುಗುಣವಾಗಿ ಮಾರ್ಗ ಬದಲಾವಣೆ ಮಾಡಿ ಕಾರ್ಯಾಚರಣೆಗೊಳಿಸಲಾಗುತ್ತಿದೆ.<br><br>ಇದಲ್ಲದೇ, ಮೆಟ್ರೋ ರೈಲು ಪ್ರಯಾಣಿಕರ ಅನುಕೂಲಕ್ಕಾಗಿ ಬೆಂ.ಮ.ಸಾ.ಸಂಸ್ಥೆಯಿಂದ ಮೆಟ್ರೋ ಫೀಡರ್ ಸೇವೆಗಳನ್ನು ಸಹ ಆಚರಣೆಗೊಳಿಸಲಾಗುತ್ತಿದೆ. |

ಸಂಖ್ಯೆ: ಟಿಡಿ 41 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

# ಅನುಬಂಧ

## ಸಾರಿಗೆ ಸಂಸ್ಥೆಗಳ ನಿಗಮದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾವಾರು ಘಟಕಗಳ ವಿವರ

| ಕ್ರ.ಸಂ. | ಜಿಲ್ಲೆಯ ಹೆಸರು | ಒಟ್ಟು ಘಟಕಗಳು |
|---|---|---|
| | ಕ.ರಾ.ರ.ಸಾ.ನಿಗಮ | |
| 1 | ಬೆಂಗಳೂರು ನಗರ | 6 |
| 2 | ಬೆಂಗಳೂರು ಗ್ರಾಮಾಂತರ | 2 |
| 3 | ರಾಮನಗರ | 5 |
| 4 | ಕೋಲಾರ | 5 |
| 5 | ತುಮಕೂರು | 8 |
| 6 | ದಾವಣಗೆರೆ | 4 |
| 7 | ಚಿತ್ರದುರ್ಗ | 3 |
| 8 | ಶಿವಮೊಗ್ಗ | 3 |
| 9 | ಮೈಸೂರು | 12 |
| 10 | ಚಿಕ್ಕಮಗಳೂರು | 3 |
| 11 | ಹಾಸನ | 9 |
| 12 | ದಕ್ಷಿಣ ಕನ್ನಡ | 7 |
| 13 | ಉಡುಪಿ | 2 |
| 14 | ಚಾಮರಾಜನಗರ | 3 |
| 15 | ಮಂಡ್ಯ | 6 |
| 16 | ಕೊಡಗು | 1 |
| 17 | ಚಿಕ್ಕಬಳ್ಳಾಪುರ | 4 |
| | **ಒಟ್ಟು** | **83** |
| | ಬೆಂ.ಮ.ಸಾ.ಸಂಸ್ಥೆ | |
| 18 | ಬೆಂಗಳೂರು ನಗರ / ಗ್ರಾಮಾಂತರ ಜಿಲ್ಲೆ | 45 |
| | ವಾ.ಕ.ರ.ಸಾ.ಸಂಸ್ಥೆ: | |
| 19 | ಬೆಳಗಾವಿ-1 | 13 |
| 20 | ಧಾರವಾಡ | 09 |
| 21 | ಕಾರವಾರ | 08 |
| 22 | ಬಾಗಲಕೋಟೆ | 08 |
| 23 | ಗದಗ | 07 |
| 24 | ಹಾವೇರಿ | 06 |
| | **ಒಟ್ಟು** | **51** |
| | ಈ.ಕ.ರ.ಸಾ.ಸಂಸ್ಥೆ | |
| 25 | ಕಲಬುರಗಿ | 11 |
| 26 | ಯಾದಗಿರಿ | 04 |
| 27 | ಬೀದರ | 06 |
| 28 | ರಾಯಚೂರು | 08 |
| 29 | ಕೊಪ್ಪಳ | 05 |
| 30 | ಬಳ್ಳಾರಿ | 11 |
| 31 | ವಿಜಯಪುರ | 08 |
| | **ಒಟ್ಟು** | **53** |
| | ಒಟ್ಟಾರೆ | 232 |